# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ನವೆಂಬರ್ ೨೭, ೨೦೧೪ (ಮಾರ್ಗಶಿರ ೬, ಶಕ ವರ್ಷ ೧೯೩೬)<br>Bengaluru, Thursday, November 27, 2014 (Margashira 6, Shaka Varsha 1936) | ಸಂಚಿಕೆ ೪೭<br>Issue 47 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕರ್ನಾಟಕ ಲೋಕಸೇವಾ ಆಯೋಗ

**ವಿಷಯ :** ಆಯೋಗವು ನಡೆಸಿದ ಅಬಕಾರಿ ರಕ್ಷಕರ (ಪುರುಷ) ಮತ್ತು (ಮಹಿಳೆ) ಸ್ಪರ್ಧಾತ್ಮಕ ಪರೀಕ್ಷೆಯ ಅಭ್ಯರ್ಥಿಗಳಾದ ಶ್ರೀ ಸಿದ್ದಪ್ಪ ಟಿ. ಕೂಸನೂರ ಮತ್ತು ಶ್ರೀ ಈರನಗೌಡ ಪಾಟೀಲ್ ಇವರುಗಳು ಪರೀಕ್ಷೆಯಲ್ಲಿ ಎಸಗಿದ್ದರೆನ್ನಲಾದ ದುರಾಚಾರ ಪ್ರಕರಣದ ಬಗ್ಗೆ.

**ಓದಲಾಗಿದೆ :**
1. ಈ ಕಛೇರಿಯ ನೋಟೀಸು ಸಂಖ್ಯೆ : ಇ(3)6694-6695/2013-14/ಪಿಎಸ್‌ಸಿ, ದಿನಾಂಕ : 04-01-2014 ಮತ್ತು ಇ(3)2597-98/2013-14/ಪಿ.ಎಸ್.ಸಿ, ದಿನಾಂಕ : 06-02-2014.
2. ಅಭ್ಯರ್ಥಿಗಳ ಸಮಜಾಯಿಷಿ ದಿನಾಂಕ : 09-01-2014 ಮತ್ತು 01-03-2014.
3. ವಿಚಾರಣಾಧಿಕಾರಿಯವರ ವರದಿ ದಿನಾಂಕ : 21-06-2014.

**ಪ್ರಸ್ತಾವನೆ :**

ಕರ್ನಾಟಕ ಲೋಕಸೇವಾ ಆಯೋಗವು ದಿನಾಂಕ : 16-06-2013ರಂದು ನಡೆಸಿದ ಅಬಕಾರಿ ರಕ್ಷಕರ ಸ್ಪರ್ಧಾತ್ಮಕ ಪರೀಕ್ಷೆಯ ಅಭ್ಯರ್ಥಿ ಶ್ರೀ ಸಿದ್ದಪ್ಪ.ಟಿ. ಕೂಸನೂರ (ನೋ.ಸಂ. 879729) ಮತ್ತು ಶ್ರೀ ಈರನಗೌಡ ಪಾಟೀಲ್ (ನೋ.ಸಂ. 879735) ಇವರುಗಳು ಓ.ಎಂ.ಆರ್. ಉತ್ತರ ಪತ್ರಿಕೆಗಳಲ್ಲಿ ನೋಂದಣಿ ಸಂಖ್ಯೆಗಳನ್ನು ಮತ್ತು ಪ್ರಶ್ನೆ ಪತ್ರಿಕೆಯ ಶ್ರೇಣಿ ಹಾಗೂ ಸಹಿಯನ್ನು ತಿದ್ದುಪಡಿ ಮಾಡಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ್ದ ಕಾರಣ ಉಲ್ಲೇಖ (1)ರಲ್ಲಿ ಓದಲಾದ ನೋಟೀಸ್‌ಗಳಲ್ಲಿ ಅವರ ಸಮಜಾಯಿಷಿಯನ್ನು ಕೇಳಲಾಗಿದ್ದು, ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ :09-01-2014 ಮತ್ತು 01-03-2014ರಂದು ಅಭ್ಯರ್ಥಿಗಳು ನೀಡಿರುವ ಸಮಜಾಯಿಷಿಯು ತೃಪ್ತಿಕರವಾಗಿಲ್ಲದಿರುವ ಹಿನ್ನೆಲೆಯಲ್ಲಿ ಈ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯಲು ಆಯೋಗದ ದಿನಾಂಕ : 28-05-2014ರ ಆದೇಶ ಸಂಖ್ಯೆ ಆಡಳಿತ 295/2014-15/ಪಿಎಸ್‌ಸಿರ ಅನ್ವಯ ಅವರ ವಿರುದ್ಧ ವಿಚಾರಣೆಯನ್ನು ನಡೆಸಲು ನಿಶ್ಚಯಿಸಿ ಅದರಂತೆ ಮೇಲ್ಕಂಡ ಪ್ರಕರಣದ ವಿಚಾರಣೆಯನ್ನು ನಡೆಸಿ ವರದಿ ಸಲ್ಲಿಸಲು ಶ್ರೀಮತಿ ಎಸ್. ಕಾತ್ಯಾಯಿನಿ, ಸಹಾಯಕ ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಅವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಈ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಡಿ.ಕೃಷ್ಣ, ಶಾಖಾಧಿಕಾರಿ ಅವರನ್ನು ಅಭಿಯೋಕ್ತ ಅಧಿಕಾರಿಯನ್ನಾಗಿ ನಿಯುಕ್ತಿಗೊಳಿಸಲಾಗಿದ್ದು, ವಿಚಾರಣಾಧಿಕಾರಿಯವರು ಉಲ್ಲೇಖಿತ ದಿನಾಂಕ : 21-06-2014ರ ವರದಿಯಲ್ಲಿ ಅಭ್ಯರ್ಥಿಗಳು ದುರುದ್ದೇಶದಿಂದ ಉತ್ತರ ಪತ್ರಿಕೆಗಳನ್ನು ಅದಲು ಬದಲು ಮಾಡಿರುವುದು ಸಾಬೀತಾಗಿರುತ್ತದೆಂದು ದೃಢೀಕೃತ ವರದಿ ನೀಡಿರುವುದನ್ನು ಕೂಲಂಕಷ ಪರಿಶೀಲಿಸಿದ ನಂತರ, ಅಭ್ಯರ್ಥಿಗೆ ಸೂಕ್ತ ದಂಡನೆಯನ್ನು ವಿಧಿಸುವ ಬಗ್ಗೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ : ಇ(3) 2076/2014-15/ಪಿಎಸ್‌ಸಿ, ದಿನಾಂಕ : 02-08-2014.**

ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ಉಪನಿಯಮ-20 ಮತ್ತು ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ : ಆಡಳಿತ/398/93-94/ಪಿಎಸ್‌ಸಿ, ದಿನಾಂಕ : 14-07-1993ರಲ್ಲಿ ಪ್ರದತ್ತವಾಗಿರುವ ಅಧಿಕಾರದ ಮೇರೆಗೆ, ಅಬಕಾರಿ ಇಲಾಖೆಯಲ್ಲಿನ ಅಬಕಾರಿ ರಕ್ಷಕರು (ಪುರುಷ) ಹುದ್ದೆಗಳ ಅಭ್ಯರ್ಥಿಗಳಾದ ಶ್ರೀ ಸಿದ್ದಪ್ಪ. ಟಿ. ಕೂಸನೂರ (ನೋ.ಸಂ. 879729) ಮತ್ತು ಶ್ರೀ ಈರನಗೌಡ ಪಾಟೀಲ್ (ನೋ.ಸಂ. 879735) ಇವರುಗಳನ್ನು ಆಯೋಗವು ದಿನಾಂಕ : 16-06-2013ರಂದು ನಡೆಸಲಾದ ಅಬಕಾರಿ ರಕ್ಷಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯಿಂದ ಡಿಬಾರ್ ಮಾಡುವುದಲ್ಲದೇ, ಆಯೋಗವು ಇನ್ನು ಮುಂದೆ ನಡೆಸುವ ಎಲ್ಲಾ ನೇಮಕಾತಿ/ಸಂದರ್ಶನ ಮತ್ತು ಸ್ಪರ್ಧಾತ್ಮಕ ಪರೀಕ್ಷೆಗಳಿಗೂ ಹಾಜರಾಗದಂತೆ ಡಿಬಾರ್ ಮಾಡುವ ದಂಡನೆಯನ್ನು ಈ ಮೂಲಕ ವಿಧಿಸಿದೆ.

**P.R. 695**
**SC-25**

**ಮನೋಜ್ ಕುಮಾರ್ ಮೀನಾ, ಭಾ.ಆ.ಸೇ.**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ,
ಬೆಂಗಳೂರು.

## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ :** 2013ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಡಾ॥ ರಾಮಕೃಷ್ಣ ಎಂ.ಕೆ. ಸೀನಿಯರ್ ರೆಸಿಡೆಂಟ್ ಇವರು ದಿನಾಂಕ : 16–02–2014ರಂದು ನಡೆದ ಅಕೌಂಟ್ಸ್ ಹೈಯರ್ ಪತ್ರಿಕೆ–1ರ ಪರೀಕ್ಷಾ ಅವಧಿಯಲ್ಲಿ ಮೊಬೈಲ್ ಹೊಂದಿದ್ದ ದುರಾಚಾರ ಪ್ರಕರಣಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :**

1. ಡಾ॥ ರಾಮಕೃಷ್ಣ ಎಂ.ಕೆ. ನೋಂ. ಸಂ. 90858, ಇವರಿಗೆ ಜಾರಿ ಮಾಡಿದ ಕಾರಣ ಕೇಳುವ ನೋಟೀಸ್ ಸಂಖ್ಯೆ : ಇ.ಪ(3) 19/2014–15/ಪಿಎಸ್‌ಸಿ, ದಿನಾಂಕ : 26–04–2014.
2. ಡಾ॥ ರಾಮಕೃಷ್ಣ ಎಂ.ಕೆ., ಇವರ ದಿನಾಂಕ ರಹಿತ ಲಿಖಿತ ಸಮಜಾಯಿಷಿ ಆಯೋಗದಲ್ಲಿ ಸ್ವೀಕೃತಗೊಂಡ ದಿನಾಂಕ : 12–05–2014.
3. ಆಯೋಗದ ತಿಳುವಳಿಕೆ ಪತ್ರ ಸಂಖ್ಯೆ : ಆ(2)100/2014–15/ಪಿಎಸ್‌ಸಿ, ದಿನಾಂಕ : 16–06–2014.
4. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ : 07–07–2014.
5. ಆಯೋಗದ ಸಭಾ ನಡವಳಿ ದಿನಾಂಕ : 31–07–2014.

**ಪ್ರಸ್ತಾವನೆ :**

ಆಯೋಗವು 2013ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಸಂಬಂಧ ದಿನಾಂಕ : 16–02–2014ರಂದು ನಡೆಸಲಾದ ಅಕೌಂಟ್ಸ್ ಹೈಯರ್ ಪತ್ರಿಕೆ–1ರ ವಿಷಯದ ಇಲಾಖಾ ಪರೀಕ್ಷೆಯ ಸಂದರ್ಭದಲ್ಲಿ ನೋಂ. ಸಂ. 90858ರ ಅಭ್ಯರ್ಥಿಯಾದ ಡಾ॥ ರಾಮಕೃಷ್ಣ ಎಂ.ಕೆ. ಸೀನಿಯರ್ ರೆಸಿಡೆಂಟ್, ಡಿಪಾರ್ಟ್‌ಮೆಂಟ್ ಆಫ್ ಜನರಲ್ ಸರ್ಜರಿ, ರಾಯಚೂರು ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ರಾಯಚೂರು ಜಿಲ್ಲೆ–584101, ಇವರು ಪರೀಕ್ಷಾ ಸಮಯದಲ್ಲಿ ತನ್ನ ಬಳಿ ಮೊಬೈಲ್ ಹೊಂದಿರುವ ಮೂಲಕ ಪರೀಕ್ಷಾ ದುರಾಚಾರ ಎಸಗಿರುತ್ತಾರೆಂದು ಆರೋಪ ಮಾಡಿ ಪರೀಕ್ಷಾ ಉಪಕೇಂದ್ರದ ಮೇಲ್ವಿಚಾರಕರು ದಿನಾಂಕ : 16–02–2014ರಂದು ಆಯೋಗಕ್ಕೆ ವರದಿ ನೀಡಿರುತ್ತಾರೆ.

ಈ ವರದಿ ಮೇರೆಗೆ ಉಲ್ಲೇಖ(1)ರಲ್ಲಿ ಓದಲಾದ ದಿನಾಂಕ : 26–04–2014ರ ಕಾರಣ ಕೇಳುವ ನೋಟೀಸ್‌ನಲ್ಲಿ ಆಪಾದಿತ ಅಭ್ಯರ್ಥಿಯಿಂದ ಲಿಖಿತ ಸಮಜಾಯಿಷಿಯನ್ನು ಕೇಳಲಾಗಿತ್ತು. ಸದರಿ ನೋಟೀಸಿಗೆ ಆಪಾದಿತರು ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ : 12–05–2014ರಂದು ಸ್ವೀಕೃತಗೊಂಡ ಲಿಖಿತ ಸಮಜಾಯಿಷಿಯಲ್ಲಿ ಅಭ್ಯರ್ಥಿಯು ತಾನು ದಿನಾಂಕ : 16–02–2014ರಂದು ನಡೆದ ಅಕೌಂಟ್ಸ್ ಹೈಯರ್ ವಿಷಯದ ಇಲಾಖಾ ಪರೀಕ್ಷೆಯನ್ನು ಬರೆಯುವ ಆತುರದಲ್ಲಿ ತಾನು ಮೊಬೈಲ್ ಬಗ್ಗೆ ಗಮನ ಹರಿಸಿರಲಿಲ್ಲ, ಮೊಬೈಲ್ ನಿಷೇಧದ ಬಗ್ಗೆ ತನಗೆ ಕಲ್ಪನೆಯೂ ಸಹ ಇರಲಿಲ್ಲವೆಂದು ಹಾಗೂ ಇದು ಒಂದು ಆಕಸ್ಮಿಕ ಘಟನೆಯಾಗಿರುತ್ತದೆ ಎಂದು ಕ್ಷಮೆಯಾಚಿಸಿರುತ್ತಾರೆ. ಅಭ್ಯರ್ಥಿಯು ನೀಡಿದ ಸಮಜಾಯಿಷಿಯು ತೃಪ್ತಿಕರವಾಗಿಲ್ಲದ ಕಾರಣ ಸದರಿ ಪ್ರಕರಣದ ಕುರಿತು ಉಲ್ಲೇಖ (3)ರಲ್ಲಿ ಓದಲಾದ ದಿನಾಂಕ : 16–06–2014ರ ತಿಳುವಳಿಕೆ ಪತ್ರವನ್ನು ಜಾರಿ ಮಾಡಿ ಅಭ್ಯರ್ಥಿ ಮೇಲಿರುವ ಆರೋಪದ ಕುರಿತಂತೆ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಉಲ್ಲೇಖ (4)ರಲ್ಲಿ ಓದಲಾದ ದಿನಾಂಕ : 07–07–2014ರ ವಿಚಾರಣಾ ವರದಿಯಲ್ಲಿ ಅಭ್ಯರ್ಥಿಯ ಮೇಲಿರುವ ಪರೀಕ್ಷಾ ಸಮಯದಲ್ಲಿ ಮೊಬೈಲ್ ಹೊಂದಿದ್ದ ಆರೋಪವು ಸಾಬೀತಾಗಿರುತ್ತದೆ ಎಂದು ತಿಳಿಸಿರುವ ಹಿನ್ನಲೆಯಲ್ಲಿ ಅಭ್ಯರ್ಥಿ ಡಾ॥ ರಾಮಕೃಷ್ಣ ಎಂ.ಕೆ. ಇವರ ದುರಾಚಾರ ಪ್ರಕರಣವನ್ನು ದಿನಾಂಕ : 31–07–2014ರ ಆಯೋಗದ ಸಭೆಯಲ್ಲಿ ಮಂಡಿಸಲಾಯಿತು. ಪ್ರಕರಣವನ್ನು ಪರಿಶೀಲಿಸಿದ ಆಯೋಗವು ಅಭ್ಯರ್ಥಿಯ ಪ್ರಸಕ್ತ 2013ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ : ಇಪ(3) 250/2014–15/ಪಿಎಸ್‌ಸಿ, ಬೆಂಗಳೂರು, ದಿನಾಂಕ : 14–08–2014.**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ ಆಡಳಿತ 398/93–94/ಪಿಎಸ್‌ಸಿ ದಿನಾಂಕ : 14–07–1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಸಂಖ್ಯೆ : 90858ರ ಅಭ್ಯರ್ಥಿ ಡಾ॥ ರಾಮಕೃಷ್ಣ ಎಂ.ಕೆ. ಸೀನಿಯರ್ ರೆಸಿಡೆಂಟ್, ಡಿಪಾರ್ಟ್‌ಮೆಂಟ್ ಆಫ್ ಜನರಲ್ ಸರ್ಜರಿ, ರಾಯಚೂರು ಇನ್ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ರಾಯಚೂರು ಜಿಲ್ಲೆ–584101, ಇವರ ವಿರುದ್ಧ ಪರೀಕ್ಷಾ ಸಮಯದಲ್ಲಿ ಮೊಬೈಲ್ ಫೋನ್ ಹೊಂದಿದ್ದ ಆರೋಪವು ಸಾಬೀತಾಗಿರುವುದರಿಂದ ಸದರಿ ಅಭ್ಯರ್ಥಿಯ ಪ್ರಸಕ್ತ ಅಂದರೆ 2013ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಿದೆ.

**ಮನೋಜ್ ಕುಮಾರ್ ಮೀನಾ, ಭಾ.ಆ.ಸೇ.**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ,
ಬೆಂಗಳೂರು.

**P.R. 698**
**SC-25**

## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ :** 2013ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ನೋಂ ಸಂ. 54872ರ ಅಭ್ಯರ್ಥಿ ಶ್ರೀಮತಿ ಪಾರ್ವತಿ ನೀಲಂಗಿ ಇವರ ಸದರಿ ಅಧಿವೇಶನ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**

1. ಶ್ರೀಮತಿ ಪಾರ್ವತಿ ನೀಲಂಗಿ, ಇವರು ಇಲಾಖಾ ಪರೀಕ್ಷೆಗೆ ಸಲ್ಲಿಸಿರುವ ಅರ್ಜಿ ಪ್ರತಿ.
2. ಆಯೋಗದ ಪತ್ರ ಸಂಖ್ಯೆ : ಇ.ಪ (3) 104/2014–15/ಪಿಎಸ್‌ಸಿ, ದಿನಾಂಕ : 28–05–2014.
3. ಉಪನಿರ್ದೇಶಕರು, ಜಾನುವಾರು ರೋಗಗಳ ಕಣ್ಗಾವಲು ಯೋಜನೆ, ಹೆಬ್ಬಾಳ, ಬೆಂಗಳೂರು ಇವರ ಪತ್ರ ಸಂಖ್ಯೆ : ಉನಿ/ಜಾರೋ/ಡಾ:ಶ.ನೀ./2014–15/371, ದಿನಾಂಕ : 04–06–2014.
4. ಅಭ್ಯರ್ಥಿಗೆ ಆಯೋಗದಿಂದ ಜಾರಿ ಮಾಡಿದ ಕಾರಣ ಕೇಳುವ ನೋಟೀಸ್ ದಿನಾಂಕ : 04–07–2014.
5. ಆಯೋಗದ ನಡವಳಿ ದಿನಾಂಕ : 31–07–2014.

**ಪ್ರಸ್ತಾವನೆ :**

ಆಯೋಗವು 2013ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಅರ್ಹ ಸರ್ಕಾರಿ ನೌಕರರುಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿ ದಿನಾಂಕ : 12–12–2013ರಂದು ಸಂಖ್ಯೆ : ಇ.ಪ(1)953/2013–14/ಪಿಎಸ್‌ಸಿ, ಅಧಿಸೂಚನೆಯನ್ನು ಹೊರಡಿಸಲಾಗಿದ್ದು, ಸದರಿ ಅಧಿಸೂಚನೆಗೆ ಪ್ರತಿಕ್ರಿಯಿಸಿ ಶ್ರೀಮತಿ ಪಾರ್ವತಿ ನೀಲಂಗಿ ಎಂಬುವವರು ಉಲ್ಲೇಖ (1)ರಲ್ಲಿ ಓದಲಾದ ಅರ್ಜಿಯನ್ನು ಆನ್‌ಲೈನ್ ಮೂಲಕ ಸಲ್ಲಿಸಿ ದಿನಾಂಕ : 18–02–2014 ರಂದು ನಡೆದ ಕನ್ನಡ ಭಾಷಾ ವಿಷಯದ ಲಿಖಿತ ಪರೀಕ್ಷೆಗೆ ಹಾಜರಾಗಿ ಉತ್ತೀರ್ಣರಾಗಿರುತ್ತಾರೆ. ನಂತರ, ಅಭ್ಯರ್ಥಿಯು ದಿನಾಂಕ : 23–04–2014ರಂದು ನಡೆಸಿದ ಕನ್ನಡ ಭಾಷಾ ವಿಷಯದ ಮೌಖಿಕ ಪರೀಕ್ಷೆಗೆ ಆಯೋಗದ ಸಮಿತಿಯ ಮುಂದೆ ಹಾಜರಾಗಲಾಗಿ ಸಮಿತಿಯಲ್ಲಿ ಮಾನ್ಯ ಆಯೋಗದ ಅಧ್ಯಕ್ಷರು ಅಭ್ಯರ್ಥಿಯ ಪೂರ್ವಪರವನ್ನು ವಿಚಾರಿಸಲಾಗಿ ಅಭ್ಯರ್ಥಿಯು ಒಬ್ಬ ಸರ್ಕಾರಿ ನೌಕರರಲ್ಲದಿದ್ದು, ಕೇವಲ ಒಬ್ಬ ಗೃಹಿಣಿ ಎಂಬ ಅಂಶವು ತಿಳಿದು ಬಂದಿರುತ್ತದೆ. ಈ ವಿಚಾರವಾಗಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಲಾದ ಎ.ಡಿ.ಎಸ್.ಎಸ್. ಕಛೇರಿಯಲ್ಲಿ ನೌಕರರಾಗಿ ಕಾರ್ಯನಿರ್ವಹಿಸುತ್ತಿದ್ದಾರೆಯೇ ? ಎಂಬ ಬಗ್ಗೆ ಉಪನಿರ್ದೇಶಕರು, ಎ.ಡಿ.ಎಸ್.ಎಸ್. ಕಛೇರಿ, ಹೆಬ್ಬಾಳ, ಬೆಂಗಳೂರು, ಇವರೊಂದಿಗೆ ಪತ್ರವ್ಯವಹಾರ (ಉಲ್ಲೇಖ–2) ನಡೆಸಲಾಗಿ ಉಪನಿರ್ದೇಶಕರ ಉಲ್ಲೇಖ(3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀಮತಿ ಪಾರ್ವತಿ ನೀಲಂಗಿಯವರು ತಮ್ಮ ಕಛೇರಿಯಲ್ಲಿ ಈ ಹಿಂದೆ ಉಪನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತ ಮೃತರಾಗಿರುವ ಡಾ॥ ಶರಣಪ್ಪ ನೀಲಂಗಿ, ಇವರ ಧರ್ಮಪತ್ನಿಯಾಗಿದ್ದು ಸದರಿಯವರು ಅನುಕಂಪದ ಆಧಾರದ ಮೇಲೆ ನೇಮಕಾತಿ ಹೊಂದಲು ಅರ್ಜಿ ಸಲ್ಲಿಸಿದ್ದು, ಈ ಸಂಬಂಧ ಸದರಿಯವರಿಗೆ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಇವರು ತಿಳಿಸಿರುವ ಪತ್ರದ ಆಧಾರದ ಮೇರೆಗೆ ಅಭ್ಯರ್ಥಿಯು 2013ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಆನ್‌ಲೈನ್ ಅರ್ಜಿ ಸಲ್ಲಿಸಿರುತ್ತಾರೆ ಎಂದು ತಿಳಿಸುತ್ತಾ, ಸದರಿ ಅಭ್ಯರ್ಥಿಯು ತಮ್ಮ ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಕರ್ತವ್ಯ ನಿರ್ವಹಿಸುತಿಲ್ಲವೆಂದು ದೃಢೀಕರಿಸಿರುತ್ತಾರೆ. ಈ ಬಗ್ಗೆ ಉಲ್ಲೇಖ (4)ರಲ್ಲಿ ಓದಲಾದ ದಿನಾಂಕ : 04–07–2014ರ ಕಾರಣ ಕೇಳುವ ನೋಟೀಸ್ ಅನ್ನು ಅಭ್ಯರ್ಥಿಯ ಮನೆ ವಿಳಾಸಕ್ಕೆ ರವಾನಿಸಲಾಗಿ, ಅಭ್ಯರ್ಥಿಯು ಸದರಿ ವಿಳಾಸದಲ್ಲಿ ದೊರಕದ ಕಾರಣ ಸ್ವೀಕೃತಗೊಳ್ಳದೇ ಆಯೋಗಕ್ಕೆ ಅಂಚೆ ಕಛೇರಿಯಿಂದ ಹಿಂತಿರುಗಿ ಬಂದಿರುತ್ತದೆ. ಸದರಿ ಪ್ರಕರಣವನ್ನು ಪರಿಶೀಲಿಸಿದ ಆಯೋಗವು ಉಲ್ಲೇಖ (5)ರಲ್ಲಿ ಓದಲಾದ ದಿನಾಂಕ : 31–07–2014ರ ಸಭೆಯ ನಡವಳಿಗಳಲ್ಲಿ ಶ್ರೀಮತಿ ಪಾರ್ವತಿ ನೀಲಂಗಿ, ಇವರು ಕರ್ನಾಟಕ ನಾಗರೀಕ ಸೇವಾ ನಿಯಮಗಳಡಿಯಲ್ಲಿ ಸೇವೆ ಸಲ್ಲಿಸುತ್ತಿಲ್ಲದಿದ್ದರೂ ಆಯೋಗವು ನಡೆಸಿದ 2013ನೇ ಸಾಲಿನ ದ್ವಿತೀಯ ಅಧಿವೇಶನದಲ್ಲಿ ಕನ್ನಡ ಭಾಷಾ ವಿಷಯದ ಇಲಾಖಾ ಪರೀಕ್ಷೆಯನ್ನು ಬರೆದಿರುವ ಇವರ ಅಭ್ಯರ್ಥಿತ್ವವನ್ನು ರದ್ದುಪಡಿಸುವಂತೆ ತೀರ್ಮಾನಿಸಲಾಗಿರುವ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ : ಇಪ(3) 251/2014–15/ಪಿಎಸ್‌ಸಿ, ಬೆಂಗಳೂರು, ದಿನಾಂಕ : 14–08–2014.**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ ಆಡಳಿತ 398/93–94/ಪಿಎಸ್‌ಸಿ ದಿನಾಂಕ : 14–07–1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಸಂಖ್ಯೆ : 54872ರ ಅಭ್ಯರ್ಥಿ ಶ್ರೀಮತಿ ಪಾರ್ವತಿ ನೀಲಂಗಿ, ಇವರು ಕರ್ನಾಟಕ ನಾಗರೀಕ ಸೇವಾ ನಿಯಮಗಳಡಿಯಲ್ಲಿ ಸೇವೆ ಸಲ್ಲಿಸುತ್ತಿಲ್ಲದಿದ್ದರೂ ಅಂದರೆ ಸರ್ಕಾರಿ ನೌಕರರಲ್ಲದಿದ್ದರೂ ನಿಯಮಬಾಹಿರವಾಗಿ ಆಯೋಗವು ನಡೆಸಿದ 2013ನೇ ಸಾಲಿನ ದ್ವಿತೀಯ ಅಧಿವೇಶನದ ಕನ್ನಡ ಭಾಷಾ ವಿಷಯದ ಇಲಾಖಾ ಪರೀಕ್ಷೆಯನ್ನು ಬರೆದಿರುವ ಹಿನ್ನೆಲೆಯಲ್ಲಿ ಇವರ ಅಭ್ಯರ್ಥಿತ್ವವನ್ನು ರದ್ದುಪಡಿಸಿದೆ.

**ಮನೋಜ್ ಕುಮಾರ್ ಮೀನಾ, ಭಾ.ಆ.ಸೇ.**

ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ,
ಬೆಂಗಳೂರು.

**P.R. 700**

**SC-25**

## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ :** ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ನೇಮಕಾತಿಗೆ ಅಭ್ಯರ್ಥಿಯಾದ ಶ್ರೀಮತಿ ವೀಣಾ ಬೆಳ್ಳುಟಗಿ (ನೋ.ಸಂ. 597993)ರವರ ವಿರುದ್ಧ ಪರೀಕ್ಷಾ ದುರಾಚಾರ ಪ್ರಕರಣದ ಬಗ್ಗೆ.

**ಓದಲಾಗಿದೆ :** ಆಯೋಗದ ದಿನಾಂಕ : 02–04–2014ರ ಕಾರಣ ಕೇಳುವ ನೋಟೀಸ್

**ಪ್ರಸ್ತಾವನೆ :**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿನ 1750 ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಹುದ್ದೆಗಳ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಶ್ರೀಮತಿ ವೀಣಾ ಬೆಳ್ಳುಟಗಿ (ನೋ.ಸ. 597993)ರ ಅಭ್ಯರ್ಥಿಯು ಕಡ್ಡಾಯ ಕನ್ನಡ ಪರೀಕ್ಷೆಗೆ 2013ನೇ ಸಾಲಿನಲ್ಲಿ ಹೆಚ್ಚುವರಿ ಅಭ್ಯರ್ಥಿಯಾಗಿದ್ದು, ಇವರು ಪರೀಕ್ಷಾ ಸಮಯದಲ್ಲಿ ನಾಮಿನಲ್ ರೋಲ್ ಕಮ್ ಅಟೆಂಡೆನ್ಸ್ ಶೀಟಿನಲ್ಲಿ ಅವರಿಗೆ ಹಂಚಿಕೆ ಮಾಡಲಾಗಿದ್ದ ನೋ.ಸಂ. 597993 ಎಂದು ನಮೂದು ಮಾಡುವುದಕ್ಕೆ ಬದಲಾಗಿ 577993 ಎಂದು ನಮೂದು ಮಾಡಿರುವುದಲ್ಲದೇ ಮುಚ್ಚಳಿಕೆ ಪತ್ರವನ್ನು ಸಹ ಬರೆದು ಕೊಡದೇ, ಪರೀಕ್ಷಾ ನಿಯಮಗಳನ್ನು ಉಲ್ಲಂಘಿಸಿದ್ದ ಕಾರಣ, ಈ ಬಗ್ಗೆ ಸಮಜಾಯಿಷಿ ನೀಡುವಂತೆ ದಿನಾಂಕ : 02–04–2014ರಂದು ಮೇಲ್ಕಂಡ ಅಭ್ಯರ್ಥಿಗೆ ನೋಟೀಸ್ ಜಾರಿ ಮಾಡಲಾಗಿತ್ತು.

ಅಭ್ಯರ್ಥಿಯು ಆಯೋಗದ ನೋಟೀಸಿಗೆ ಸಂಬಂಧಿಸಿದಂತೆ, ಯಾವುದೇ ಲಿಖಿತ ಸಮಜಾಯಿಷಿ ಸಲ್ಲಿಸದ ಕಾರಣ, ಪ್ರಕರಣದ ಬಗ್ಗೆ ವಿಚಾರಣೆ ನಡೆಸಲು ದಿನಾಂಕ : 03–07–2014ರಂದು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ವಿಚಾರಣೆ ನಡೆಸಲಾಯಿತು. ವಿಚಾರಣಾಧಿಕಾರಿಯವರು ಮೇಲ್ಕಂಡ ಅಭ್ಯರ್ಥಿಗೆ ಎರಡು ನೋಟೀಸ್‌ಗಳನ್ನು ಜಾರಿ ಮಾಡಿದ್ದರೂ ಸಹ ಸದರಿಯವರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಆದುದರಿಂದ, ಅಪಾದಿತರಿಗೆ ನೀಡಲಾಗಿರುವ ನೋಟೀಸ್‌ನಲ್ಲಿ ಈಗಾಗಲೇ ಸೂಚಿಸಿರುವಂತೆ, ಆಯೋಗವು ಏಕಪಕ್ಷೀಯ ನಿರ್ಧಾರ ಕೈಗೊಳ್ಳಬಹುದಾಗಿದೆ ಎಂದು ವಿಚಾರಣೆಯ ವರದಿಯಲ್ಲಿ ಅಭಿಪ್ರಾಯಿಸಿರುವ ಹಿನ್ನೆಲೆಯಲ್ಲಿ ಆಯೋಗವು ಅಭ್ಯರ್ಥಿಯ ವಿರುದ್ಧ ಸೂಕ್ತ ದಂಡನೆಯನ್ನು ವಿಧಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ : ಇ(3) 2131/2014–15/ಪಿಎಸ್‌ಸಿ, ದಿನಾಂಕ : 19–09–2014.**

ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ : ಆಡಳಿತ 398/93–94/ಪಿಎಸ್‌ಸಿ, ದಿನಾಂಕ : 14–07–1993ರಲ್ಲಿ ಆಯೋಗವು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿನ ದುರಾಚಾರ ಪ್ರಕರಣಗಳ ವಿನಿಯಮಗಳ ಉಪನಿಯಮ–4(11)ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಆಪಾದಿತ ಅಭ್ಯರ್ಥಿಯಾದ ಶ್ರೀಮತಿ ವೀಣಾ ಬೆಳ್ಳುಟಗಿ (ನೋಂದಣಿ ಸಂಖ್ಯೆ : 597993) ಇವರ ಅಭ್ಯರ್ಥಿತ್ವವನ್ನು ರದ್ದುಪಡಿಸಿದೆ ಹಾಗೂ ದಿನಾಂಕ : 10–09–2014ರಿಂದ ಮುಂದಿನ ಒಂದು ವರ್ಷದ ಅವಧಿಯಲ್ಲಿ ಆಯೋಗದಿಂದ ನಡೆಸುವ ಯಾವುದೇ ಪರೀಕ್ಷೆಗೆ ಸದರಿ ಅಭ್ಯರ್ಥಿಯನ್ನು ಡಿಬಾರ್ ಮಾಡುವ ದಂಡನೆಯನ್ನು ಈ ಮೂಲಕ ವಿಧಿಸಿದೆ.

ಆಯೋಗದ ಆದೇಶದ ಮೇರೆಗೆ

**ಮನೋಜ್ ಕುಮಾರ್ ಮೀನಾ, ಭಾ.ಆ.ಸೇ.**

ಕಾರ್ಯದರ್ಶಿ,

ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**P.R. 717**

**SC-15**

## DIRECTORATE OF ECONOMICS AND STATISTICS, BANGALORE-1

### Consumer Price Index Numbers for Industrial Workers

### No. DES/24/PWX 2014,

**State : Karnataka** **Base : 1987-88=100** **Month : June**

**Date:20-09-2014**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| **I.** | **FOOD:** | | | | | | | | | | | |
| | (a) Cereals & Cereals Products | 983 | 951 | 1087 | 882 | 920 | 968 | 966 | 1021 | 803 | 1057 | 958 |
| | (b) Pulses & Pulse Products | 707 | 791 | 799 | 901 | 672 | 768 | 792 | 778 | 782 | 739 | 725 |
| | (c) Oil & Fats | 458 | 436 | 464 | 449 | 449 | 455 | 448 | 512 | 436 | 419 | 439 |
| | (d) Meat Fish & Eggs | 907 | 1086 | 1191 | 1042 | 1004 | 1085 | 957 | 1076 | 725 | 1213 | 1117 |
| | (e) Milk & Milk Products | 737 | 684 | 775 | 875 | 734 | 779 | 752 | 787 | 684 | 755 | 731 |
| | (f) Condiments & Spices | 612 | 7 33 | 1000 | 874 | 603 | 672 | 781 | 822 | 672 | 764 | 721 |
| | (g) Vegetables & Fruits | 836 | 976 | 1015 | 950 | 797 | 825 | 863 | 957 | 768 | 671 | 1113 |
| | (h) Other Food | 598 | 888 | 890 | 795 | 719 | 64 8 | 710 | 763 | 767 | 694 | 658 |
| | **FOOD GROUP INDEX** | **796** | **858** | **950** | **848** | **777** | **802** | **831** | **908** | **740** | **863** | **832** |
| **II.** | Pan, Supari, Tobacco & Intoxicants | 837 | 1014 | 935 | 864 | 732 | 907 | 775 | 858 | 592 | 727 | 686 |
| **III.** | Fuel & Light | 677 | 653 | 697 | 781 | 681 | 696 | 677 | 729 | 592 | 903 | 526 |
| **IV.** | Housing | 100 | 100 | 100 | 100 | 100 | 100 | 100 | 100 | 100 | 100 | 100 |
| **V.** | Clothing, Bedding & Footwear | 360 | 566 | 515 | 480 | 403 | 469 | 601 | 726 | 358 | 720 | 235 |
| **VI.** | **Miscellaneous:** | | | | | | | | | | | |
| | (a) Medical Care | 751 | 966 | 644 | 493 | 387 | 362 | 675 | 634 | 465 | 507 | 374 |
| | (b) Education, Recreation & Amusement | 790 | 794 | 1113 | 488 | 942 | 1148 | 835 | 640 | 1125 | 1585 | 1006 |
| | (c) Transport & Communication | 709 | 864 | 778 | 788 | 868 | 813 | 818 | 1116 | 920 | 777 | 805 |
| | (d) Personal Car & effects | 442 | 524 | 577 | 592 | 691 | 468 | 492 | 554 | 544 | 506 | . 4 88 |
| | (e) Other | 553 | 543 | 701 | 848 | 497 | 520 | 558 | 730 | 395 | 708 | 469 |
| | Miscellaneous Group | 611 | 684 | 742 | 627 | 669 | 641 | 634 | 676 | 668 | 751 | 590 |
| | **GENERAL INDEX** | **645** | **700** | **756** | **697** | **625** | **647** | **693** | **754** | **622** | **744** | **574** |
| | **To convert to Base 1960 Multiply by Linking Factor.** | **7.39** | **9.19** | **8.27** | **-** | **8.26** | **8.56** | **9.25** | **7.92** | **9.31** | **-** | **-** |

**ಜಂಟಿ ನಿರ್ದೇಶಕರು**

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

**Government of India**

**Ministry of Labour**

**Labour Bureau**

**NO. 112/1 (KTK) /2014 CPI Dated: 1st Aug, 2014**

**Consumer Price Index Numbers for Industrial Workers (Base : 2001=100)**

**Month : June 2014**

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| **FOOD :** | | | | | |
| (a) Cereals & Cereals Products | 264 | 295 | 266 | 269 | 297 |
| (b) Pulses and & Products | 252 | 249 | 276 | 274 | 247 |
| (c) Oils & Fats | 235 | 244 | 204 | 265 | 215 |
| (d) Meat, Fish & Eggs | 378 | 330 | 345 | 320 | 328 |
| (e) Milk & Products | 298 | 272 | 252 | 265 | 290 |
| (f) Condiments & Spices | 254 | 292 | 318 | 279 | 309 |
| (g) Vegetables & Fruits | 383 | 320 | 387 | 280 | 355 |
| (h) Other Food | 268 | 292 | 274 | 269 | 272 |
| **FOOD GROUP** | 285 | 292 | 282 | 278 | 294 |
| Pan, Supari, Tobacco & Intoxicants | 267 | 266 | 282 | 225 | 288 |
| Fuel & Light | 214 | 181 | 208 | 344 | 204 |
| Housing index | 237 | 219 | 335 | 102 | 264 |
| Clothing, Bedding & Footwear | 170 | 150 | 169 | 187 | 177 |
| **Miscellaneous** | | | | | |
| (a) Medical care | 201 | 252 | 218 | 224 | 195 |
| (b) Education, Recreation and Amusement | 173 | 172 | 177 | 329 | 134 |
| (c) Transport and Communication | 324 | 346 | 328 | 303 | 283 |
| (d) Personal Care & Effects | 205 | 238 | 241 | 213 | 221 |
| (e) Others | 231 | 223 | 227 | 212 | 277 |
| Miscellaneous Group | 224 | 256 | 240 | 255 | 215 |
| **GENERAL INDEX** | 254 | 254 | 269 | 253 | 259 |

**L.R. CHAUHAN**
ECONOMIC OFFICER

**P.R. 718**
**SC-05**

**ಜಂಟಿ ನಿರ್ದೇಶಕರು**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

## DIRECTORATE OF ECONOMICS AND STATISTICS, BANGALORE-1

**Consumer Price Index Numbers for Industrial Workers**

**No. DES 24 PWX 2014,**

**State : Karnataka** **Base : 1987-88=100** **Month : July**
**Date:20-09-2014**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | FOOD: | | | | | | | | | | | |
| | (a) Cereals & Cereals Products | 975 | 952 | 1093 | 893 | 926 | 986 | 968 | 1014 | 806 | 1063 | 971 |
| | (b) Pulses & Pulse Products | 706 | 776 | 810 | 893 | 687 | 763 | 734 | 774 | 797 | 724 | 730 |
| | (c) Oil & Fats | 458 | 411 | 464 | 446 | 446 | 456 | 451 | 505 | 440 | 408 | 433 |
| | (d) Meat Fish & Eggs | 907 | 1103 | 1164 | 1042 | 1004 | 1087 | 960 | 1084 | 728 | 1190 | 1087 |
| | (e) Milk & Milk Products | 737 | 684 | 775 | 875 | 759 | 779 | 752 | 787 | 684 | 755 | 731 |
| | (f) Condiments & Spices | 640 | 789 | 1052 | 900 | 633 | 736 | 828 | 872 | 713 | 838 | 767 |
| | (g) Vegetables & Fruits | 893 | 1003 | 1087 | 1009 | 794 | 858 | 959 | 1065 | 794 | 707 | 1217 |
| | (h) Other Food | 598 | 954 | 893 | 801 | 718 | 640 | 725 | 763 | 769 | 694 | 654 |
| | **FOOD GROUP INDEX** | **801** | **874** | **963** | **859** | **785** | **814** | **841** | **916** | **747** | **869** | **846** |
| II. | Pan, Supari, Tobacco & Intoxicants | 836 | 1046 | 930 | 868 | 735 | 923 | 782 | 857 | 592 | 727 | 873 |
| III. | Fuel & Light | 677 | 627 | 694 | 781 | 689 | 687 | 678 | 729 | 590 | 903 | 526 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 359 | 553 | 518 | 478 | 403 | 472 | 597 | 727 | 359 | 720 | 235 |
| VI. | Miscellaneous: | | | | | | | | | | | |
| | (a) Medical Care | 751 | 966 | 643 | 493 | 387 | 362 | 683 | 631 | 465 | 507 | 374 |
| | (b) Education, Recreation & Amusement | 861 | 792 | 1114 | 489 | 942 | 1148 | 846 | 641 | 1126 | 1585 | 1006 |
| | (c) Transport & Communication | 709 | 863 | 776 | 788 | 868 | 807 | 818 | 1116 | 920 | 777 | 805 |
| | (d) Personal Car & effects | 443 | 535 | 581 | 600 | 692 | 471 | 494 | 555 | 546 | 517 | 495 |
| | (e) Other | 553 | 543 | 701 | 844 | 499 | 512 | 543 | 735 | 402 | 706 | 469 |
| | Miscellaneous Group | 624 | 686 | 743 | 627 | 670 | 639 | 636 | 679 | 670 | 754 | 592 |
| | **GENERAL INDEX** | **650** | **706** | **762** | **702** | **630** | **653** | **699** | **758** | **627** | **748** | **580** |
| | **To convert to Base 1960 Multiply by Linking Factor.** | **7.39** | **9.19** | **8.27** | **-** | **8.26** | **8.56** | **9.25** | **7.92** | **9.31** | **-** | **-** |

**ಜಂಟಿ ನಿರ್ದೇಶಕರು**

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,

ಬೆಂಗಳೂರು.

**Government of India**

**Ministry of Labour**

**Labour Bureau**

**NO. 112/1 (KTK) /2014 CPI**

**Consumer Price Index Numbers for Industrial Workers (Base : 2001=100)**

**Month : July 2014**

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| **FOOD :** | | | | | |
| (a) Cereals & Cereals Products | 265 | 297 | 267 | 271 | 298 |
| (b) Pulses and & Products | 251 | 242 | 275 | 271 | 252 |
| (c) Oils & Fats | 233 | 240 | 203 | 267 | 215 |
| (d) Meat, Fish & Eggs | 380 | 337 | 352 | 317 | 336 |
| (e) Milk & Products | 298 | 274 | 252 | 265 | 290 |
| (f) Condiments & Spices | 286 | 327 | 338 | 300 | 345 |
| (g) Vegetables & Fruits | 447 | 371 | 396 | 335 | 399 |
| (h) Other Food | 268 | 293 | 275 | 277 | 272 |
| **FOOD GROUP** | 293 | 301 | 284 | 288 | 303 |
| Pan, Supari, Tobacco & Intoxicants | 267 | 265 | 284 | 226 | 288 |
| Fuel & Light | 214 | 181 | 208 | 344 | 208 |
| Housing index | 242 | 226 | 354 | 102 | 276 |
| Clothing, Bedding & Footwear | 171 | 159 | 171 | 188 | 176 |
| Miscellaneous | | | | | |
| (a) Medical care | 193 | 247 | 211 | 231 | 195 |
| (b) Education, Recreation and Amusement | 173 | 172 | 177 | 329 | 134 |
| (c) Transport and Communication | 325 | 347 | 334 | 304 | 286 |
| (d) Personal Care & Effects | 204 | 243 | 242 | 214 | 221 |
| (e) Others | 231 | 222 | 227 | 212 | 277 |
| Miscellaneous Group | 221 | 257 | 239 | 256 | 216 |
| **GENERAL INDEX** | 259 | 260 | 273 | 259 | 265 |

**L.R. CHAUHAN**
ECONOMIC OFFICER

**ಜಂಟಿ ನಿರ್ದೇಶಕರು**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು.

**P.R. 719**
**SC-05**

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ. 1, ಅಲಿ ಆಸ್ಕರ್ ರಸ್ತೆ, ಬೆಂಗಳೂರು–52 ಇವರ ನ್ಯಾಯಾಲಯ, ದಾವಾ ಸಂಖ್ಯೆ : ಆರ್‌ಸಿಎಸ್/ಡಿ–4/ಡಿಐಎಸ್/ಸೌಹಾರ್ದ್ 333/2014–15**

| ವಾದಿ | ಪ್ರತಿವಾದಿಗಳು |
|---|---|
| ವಿಶೇಷಾಧಿಕಾರಿ.<br>ಶ್ರೀ ಶಕ್ತಿ ಕ್ರೆಡಿಟ್ ಸೌಹಾರ್ದ ಸಹಕಾರಿ ನಿ,<br>ಕಛೇರಿ : # 20, 8ನೇ ಮುಖ್ಯ ರಸ್ತೆ, 8ನೇ ತಿರುವು,<br>ಮಲ್ಲೇಶ್ವರಂ, ಬೆಂಗಳೂರು–03. | ಶ್ರೀ ಎ.ಎನ್. ಕುಮಾರ್<br>ತಂದೆ : ಅಶ್ವಥನಾರಾಯಣ,<br>ಮನೆ ನಂ. 171/1, 6ನೇ ತಿರುವು, 8ನೇ ಮುಖ್ಯ ರಸ್ತೆ,<br>ಮಲ್ಲೇಶ್ವರಂ, ಬೆಂಗಳೂರು–03 |

ವಾದಿಯು ಈ ದಾವೆಯನ್ನು ಪ್ರತಿವಾದಿಯ ವಿರುದ್ಧ ದಾಖಲಿಸಿ ಷೆಡ್ಯೂಲ್ ಸ್ವತ್ತನ್ನು ವಾದಿಯ ಹೆಸರಿಗೆ ವರ್ಗಾಯಿಸಲು ಪ್ರತಿವಾದಿಗೆ ನಿರ್ದೇಶನ ನೀಡಲು ಕೋರಿರುತ್ತಾರೆ. ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿ ಅರ್ಜಿ ಸಲ್ಲಿಸಿದ್ದು, ಅರ್ಜಿದಾರರು ತಮ್ಮ ಅರ್ಜಿಯಲ್ಲಿ ವಾದಿ ಸಂಘದ ಆಡಳಿತ ಮಂಡಳಿಯನ್ನು ರದ್ದುಪಡಿಸಿದ್ದು ಪ್ರತಿವಾದಿಯು ರದ್ದತಿಯಾದ ಆಡಳಿತ ಮಂಡಳಿಯ ಸದಸ್ಯರಾಗಿದ್ದು ಪ್ರತಿವಾದಿಯು ಸಂಘದ ನಿಧಿಗಳಿಂದ ಷೆಡ್ಯೂಲ್ ಸ್ವತ್ತನ್ನು ಖರೀದಿಸಿದ್ದಾರೆಂದು ಅರ್ಜಿದಾರರು ಹೇಳಿರುತ್ತಾರೆ. ಹೀಗೆ ಖರೀದಿಸಿದ ಸದರಿ ಸ್ವತ್ತನ್ನು ಸಂಘದ ವಶಕ್ಕೆ ನೀಡದೇ ಇದ್ದ ಕಾರಣ ವಿಶೇಷಾಧಿಕಾರಿಗಳು ಸಂಘದ ಸ್ವತ್ತನ್ನು ಕಾಪಾಡಲು ಷೆಡ್ಯೂಲ್ ಸ್ವತ್ತನ್ನು ಅರ್ಜಿದಾರರ ಸಂಸ್ಥೆಗೆ ವರ್ಗಾಯಿಸಲು ಪ್ರತಿವಾದಿಗೆ ನಿರ್ದೇಶನ ನೀಡಲು ಕೋರಿ ದಾವೆ ಹೂಡಿದ್ದಾರೆಂದು ಹೇಳಿರುತ್ತಾರೆ. ಷೆಡ್ಯೂಲ್ ಸ್ವತ್ತನ್ನು ಪ್ರತಿವಾದಿಯು ಪರಭಾರೆ ಮಾಡಿದ್ದಲ್ಲಿ ಮುಂದೆ ದಾವೆಯನ್ನು ಪರಿಗಣಿಸಿ ಆದೇಶ ಹೊರಡಿಸಿದರೂ ಅದು ನಿರರ್ಥಕವಾಗುವುದಾಗಿ ಹೇಳಿ ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುತ್ತಾರೆ.

**ನೋಟೀಸ್**

**ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರಡಿ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶ**

ಅರ್ಜಿದಾರರ ಅರ್ಜಿಯನ್ನು ಪರಿಗಣಿಸಿದೆ, ಪ್ರತಿವಾದಿಯ ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ಪರಭಾರೆ ಮಾಡದಂತೆ, ಕಲಂ 44(1) ರಂತೆ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶ ಮಾಡಿ ಆದೇಶಿಸಿದೆ. ಈ ಆದೇಶದ ಬಗ್ಗೆ ಪ್ರತಿವಾದಿಯು ತನ್ನ ಆಕ್ಷೇಪಣೆ/ ವಿವರಣೆ ಸಲ್ಲಿಸಲು ಉದ್ದೇಶಿಸಿದ್ದಲ್ಲಿ ಈ ಆದೇಶವನ್ನು ಪಡೆದ ಒಂದು ತಿಂಗೊಳಗೆ ಆಕ್ಷೇಪಣೆ/ ವಿವರಣೆ ಸಲ್ಲಿಸಲು ಸೂಚಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದು.

**ಷೆಡ್ಯೂಲ್ ಸ್ವತ್ತು :–**

ಸ್ಥಿರಾಸ್ತಿ :

| ಕ್ರ ಸಂ. | ಗ್ರಾಮದ ಹೆಸರು | ಸರ್ವೆ ಸಂಖ್ಯೆ | ವಿಸ್ತೀರ್ಣ | ಚಕ್ಕು ಬಂದಿ |
|---|---|---|---|---|
| 1. | ದೊಮ್ಮಸಂದ್ರ ಗ್ರಾಮ, ಸರ್ಜಾಪುರ ಹೋಬಳಿ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ | 1. ಸರ್ವೆ ನಂ. 151/2<br>2. ಸರ್ವೆ ನಂ. 152/2 | 1. 3 1/2, ಗುಂಟೆ ಜಮೀನು<br>2. 2 ಗುಂಟೆ ಜಮೀನು (ಫಾರಂ ಹೌಸ್ ನಂ. 35) | ಪೂರ್ವ : ಫಾರಂ ಹೌಸ್ ನಂ. 36<br>ಪಶ್ಚಿಮ : ಫಾರಂ ಹೌಸ್ ನಂ. 34<br>ಉತ್ತರ : ಸರ್ವೆ ನಂ. 152/2<br>ದಕ್ಷಿಣ : ರಸ್ತೆ |

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ : 27/09/2014 ರಂದು ನನ್ನ ರುಜು ಹಾಗೂ ಕಛೇರಿಯ ಮೊಹರ್ನಿಶಿಯೊಂದಿಗೆ ನೀಡಲಾಗಿದೆ.

**P.R. 720** **ಸಹಕಾರ ಸಂಘಗಳ ನಿಬಂಧಕರು**

**SC-05** ಕರ್ನಾಟಕ ರಾಜ್ಯ, ಬೆಂಗಳೂರು.

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಹಿವಕ 139 ಬಿಇಟಿ 2014, ಬೆಂಗಳೂರು, ದಿನಾಂಕ:22–08–2014**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಉಪ ನಿರ್ದೇಶಕರ ವೃಂದದ ಜೇಷ್ಠತಾ ಪಟ್ಟಿಯನ್ನು ದಿನಾಂಕ:01–01–2014 ರಲ್ಲಿದ್ದಂತೆ ತಯಾರಿಸಲು ಸರ್ಕಾರವು ತೀರ್ಮಾನಿಸಿದೆ. ಕರ್ನಾಟಕ ಸರ್ಕಾರಿ ನೌಕರರ ಜೇಷ್ಠತಾ ನಿಯಮಾವಳಿ 1957 ರ ನಿಯಮ 10ನ್ನು ಅನುಸರಿಸಿ ಸಂಬಂಧಪಟ್ಟ ಅಧಿಕಾರಿಯ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಈ ಮೂಲಕ ಪ್ರಕಟಿಸಿದೆ.

ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಲಿಖಿತ ದಾಖಲೆಗಳ ಮೂಲಕ ಜೇಷ್ಠತಾ ಪಟ್ಟಿಯು ಪ್ರಕಟವಾದ 15 ದಿನಗಳ ಕಾಲಾವಧಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, 2ನೇ ಮಹಡಿ, ವಿಕಾಸಸೌಧ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು. ಈ ಜೇಷ್ಠತಾ ಪಟ್ಟಿಯಲ್ಲಿ ಕಾಣಿಸಿರುವ ಹೆಸರು, ದಿನಾಂಕ, ಸೇವಾ ವಿವರ ಮುಂತಾದವುಗಳಲ್ಲಿ ನಿರ್ದಿಷ್ಟ ತಪ್ಪುಗಳು ಕಂಡು ಬಂದು, ಅವುಗಳ ಬದಲಾವಣೆ ಅವಶ್ಯವಿದ್ದಲ್ಲಿ, ನಿರ್ದಿಷ್ಟ ದಾಖಲೆಗಳೊಂದಿಗೆ ಕೆಳಗೆ ಸಹಿ ಮಾಡಿರುವವರ ಗಮನಕ್ಕೆ ತರಬಹುದು. ನಿರ್ದಿಷ್ಟ ಕಾರಣಗಳು, ದಾಖಲೆಗಳು, ಆಧಾರವಿಲ್ಲದಿರುವ ಆಕ್ಷೇಪಣೆಗಳನ್ನು ಮತ್ತು ಅವಧಿ ಮೀರಿದ ಆಕ್ಷೇಪಣೆಗಳನ್ನು ಸರ್ಕಾರವು ಪರಿಗಣಿಸುವುದಿಲ್ಲ.

| ಕ್ರ ಸಂ | ಅಧಿಕಾರಿಯ ಹೆಸರು ಶ್ರೀಯುತರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹಾಲಿ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ದಿನಾಂಕ |
|---|---|---|---|---|
| 1 | ಶಿವಣ್ಣ | 02.02.1956 | 01.02.1984 | 01.08.2012 |
| 2 | ಲಕ್ಷ್ಮಾನಾಯಕ್ | 22.07.1956 | 06.08.1980<br>(ವಿಲೀನ)<br>23.07.1999 | ಸದರಿಯವರು ಮುಂಬಡ್ತಿಯನ್ನು ನಿರಾಕರಿಸಿ ಮನವಿ ಸಲ್ಲಿಸಿರುತ್ತಾರೆ. |

| ಕ್ರ ಸಂ | ಅಧಿಕಾರಿಯ ಹೆಸರು ಶ್ರೀಯುತರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹಾಲಿ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ದಿನಾಂಕ |
|---|---|---|---|---|
| 3 | ಜಿ.ಜಗದೀಶ್ | 25.05.1970 | 18.07.1996 (ವಿಲೀನ) 01.01.2004 | 19.07.2013. |
| 4 | ಡಾ:ಸಿ.ಕೆ.ಜಗದೀಶ್ ಕುಮಾರ್ | 04.06.1970 | 29.08.1996 (ವಿಲೀನ) 01.03.2004 | 03.07.2013 |
| 5 | ಹೆಚ್.ಜಿ.ಪ್ರಭಾಕರ್ | 15.05.1979 | 05.07.2006 | 03.06.2013 |
| 6 | ಬಿ.ಎಸ್.ಪ್ರದೀಪ್ | 12.03.1978 | 28.06.2006 | 31.05.2013 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್.ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**P.R. 706**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಹಿವಕ 139 ಬಿಇಟಿ 2014, ಬೆಂಗಳೂರು, ದಿನಾಂಕ:22-08-2014**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಉಪ ನಿರ್ದೇಶಕರ ವೃಂದದ ಜೇಷ್ಠತಾ ಪಟ್ಟಿಯನ್ನು ದಿನಾಂಕ:01-01-2013 ರಲ್ಲಿದ್ದಂತೆ ತಯಾರಿಸಲು ಸರ್ಕಾರವು ತೀರ್ಮಾನಿಸಿದೆ. ಕರ್ನಾಟಕ ಸರ್ಕಾರಿ ನೌಕರರ ಜೇಷ್ಠತಾ ನಿಯಮಾವಳಿ 1957 ರ ನಿಯಮ 10ನ್ನು ಅನುಸರಿಸಿ ಸಂಬಂಧಪಟ್ಟ ಅಧಿಕಾರಿಯ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಈ ಮೂಲಕ ಪ್ರಕಟಿಸಿದೆ.

ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಲಿಖಿತ ದಾಖಲೆಗಳ ಮೂಲಕ ಜೇಷ್ಠತಾ ಪಟ್ಟಿಯು ಪ್ರಕಟವಾದ 15 ದಿನಗಳ ಕಾಲಾವಧಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, 2ನೇ ಮಹಡಿ, ವಿಕಾಸಸೌಧ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು. ಈ ಜೇಷ್ಠತಾ ಪಟ್ಟಿಯಲ್ಲಿ ಕಾಣಿಸಿರುವ ಹೆಸರು, ದಿನಾಂಕ, ಸೇವಾ ವಿವರ ಮುಂತಾದವುಗಳಲ್ಲಿ ನಿರ್ದಿಷ್ಟ ತಪ್ಪುಗಳು ಕಂಡು ಬಂದು, ಅವುಗಳ ಬದಲಾವಣೆ ಅವಶ್ಯವಿದ್ದಲ್ಲಿ, ನಿರ್ದಿಷ್ಟ ದಾಖಲೆಗಳೊಂದಿಗೆ ಕೆಳಗೆ ಸಹಿ ಮಾಡಿರುವವರ ಗಮನಕ್ಕೆ ತರಬಹುದು. ನಿರ್ದಿಷ್ಟ ಕಾರಣಗಳು, ದಾಖಲೆಗಳು, ಆಧಾರವಿಲ್ಲದಿರುವ ಆಕ್ಷೇಪಣೆಗಳನ್ನು ಮತ್ತು ಅವಧಿ ಮೀರಿದ ಆಕ್ಷೇಪಣೆಗಳನ್ನು ಸರ್ಕಾರವು ಪರಿಗಣಿಸುವುದಿಲ್ಲ.

| ಕ್ರ ಸಂ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹಾಲಿ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ದಿನಾಂಕ |
|---|---|---|---|---|
| 1 | ಶ್ರೀ ಶಿವಣ್ಣ | 02-02-1956 | 01-02-1984 | 01-08-2012 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್.ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**P.R. 707**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಹಿವಕ 139 ಬಿಇಟಿ 2014, ಬೆಂಗಳೂರು, ದಿನಾಂಕ:22-08-2014**

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಉಪ ನಿರ್ದೇಶಕರ ವೃಂದದ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01-01-2012 ರಲ್ಲಿದ್ದಂತೆ ತಯಾರಿಸಲು ಸರ್ಕಾರವು ತೀರ್ಮಾನಿಸಿದೆ. ಕರ್ನಾಟಕ ಸರ್ಕಾರಿ ನೌಕರರ ಜೇಷ್ಠತಾ ನಿಯಮಾವಳಿ 1957 ರ ನಿಯಮ 10 ನ್ನು ಅನುಸರಿಸಿ ಸಂಬಂಧಪಟ್ಟ ಅಧಿಕಾರಿಯ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಈ ಮೂಲಕ ಪ್ರಕಟಿಸಿದೆ.

ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಲಿಖಿತ ದಾಖಲೆಗಳ ಮೂಲಕ ಜೇಷ್ಠತಾ ಪಟ್ಟಿಯು ಪ್ರಕಟವಾದ 15 ದಿನಗಳ ಕಾಲಾವಧಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, 2ನೇ ಮಹಡಿ, ವಿಕಾಸಸೌಧ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು. ಈ ಜೇಷ್ಠತಾ ಪಟ್ಟಿಯಲ್ಲಿ ಕಾಣಿಸಿರುವ ಹೆಸರು, ದಿನಾಂಕ, ಸೇವಾ ವಿವರ ಮುಂತಾದವುಗಳಲ್ಲಿ ನಿರ್ದಿಷ್ಟ ತಪ್ಪುಗಳು ಕಂಡು ಬಂದು, ಅವುಗಳ ಬದಲಾವಣೆ ಅವಶ್ಯವಿದ್ದಲ್ಲಿ, ನಿರ್ದಿಷ್ಟ ದಾಖಲೆಗಳೊಂದಿಗೆ ಕೆಳಗೆ ಸಹಿ ಮಾಡಿರುವವರ ಗಮನಕ್ಕೆ ತರಬಹುದು. ನಿರ್ದಿಷ್ಟ ಕಾರಣಗಳು, ದಾಖಲೆಗಳು, ಆಧಾರವಿಲ್ಲದಿರುವ ಆಕ್ಷೇಪಣೆಗಳನ್ನು ಮತ್ತು ಅವಧಿ ಮೀರಿದ ಆಕ್ಷೇಪಣೆಗಳನ್ನು ಸರ್ಕಾರವು ಪರಿಗಣಿಸುವುದಿಲ್ಲ.

| ಕ್ರ ಸಂ | ಅಧಿಕಾರಿಯ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಹಾಲಿ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ದಿನಾಂಕ |
|---|---|---|---|---|
| 1 | ಪಿ.ಎ.ಗಣಪತಿ | 19.06.1955 | 02.02.1984 | 28.01.2010 |
| 2 | ಎಸ್.ಟಿ.ದೇವರಾಜ್ | 23.03.1962 | 01.03.1990 | 20.01.2010 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್.ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**P.R. 708**

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE - CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub:** KVAT Act, 2003 - Clarification under Section 59(4) regarding the rate of VAT applicable on "EXXSOL D95 FLUID" - reg.

**Ref:** Application dated 31-05-2013 of M/s Pon Pure Chem (P) Ltd, Bangalore, seeking clarification regarding the rate of entry tax, (TIN: 29880311316).

In the application cited above, M/s Pon Pure Chem (P) Ltd, Sy. No. 24/2 & 24/3-A, Anchepalya, Tumkur Road, Nagasandra Post, Bangalore - 560073 filed under Entry Tax Act, has sought clarification regarding rate of entry tax applicable on "EXXSOL D95 FLUID".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if the considers it necessary or expedient so to do, for the purpose of maintaining uniformity in the work of assessments and collection of revenue.

3. While clarifying the rate of entry tax it is felt necessary to clarify the rate of VAT on the above product for the purpose of maintaining uniformity in the work of assessments and collection of revenue.

4. Hence, the following clarification is issued on the VAT rate.

### CLARIFICATION NO. VAT/CLR/CR-02/2013-14, DATED 22-09-2014

It is clarified that "EXXSOL D95 FLUID" falling under CET heading '27101990', a petroleum product is liable to tax at 14.5% from 01-08-2012 as unscheduled goods under Section 4(1) (b)(iii) of the Karnataka Value Added Tax Act, 2003.

**AJAY SETH**

Commissioner of Commercial Taxes

(Karnataka), Bangalore.

**P.R. 709**

**SC-100**

## KARNATAKA STATE BAR COUNCIL, OLD K.G.I.D BLDG., BANGALORE

### NOTIFICATION

**No. 13 / 2014 Bangalore, Dated:07-10-2014.**

As per Rule 8 & 12 of "The Karnataka State Bar Council (election of Chairman & Vice Chairman) Rules, 1978", it is declared that the following Members of the Bar Council have been elected unopposed to the Office of the Chairman & Vice Chairman.

**CHAIRMAN**

| Sl.No. | Name of the Candidates | Address |
|---|---|---|
| 1 | PADMA PRASAD HEGDE @ P.P. HEGDE | TAKSHILA, BALLAL BHAG, 6TH CROSS, MANGALORE-3<br>Ph : Off: 2454409<br>Res : 2454405 STD 0824<br>Mbl : 9844074409, 9448503809 |

**VICE CHAIRMAN**

| Sl.No. | Name of the Candidates | Address |
|---|---|---|
| 1 | ANIL KUMAR.J.M | NO.206, II FLOOR, 4TH CROSS, ESTEEM PLAZA, UPPER PALACE ORCHARDS, SADASHIVANAGAR, BANGALORE-80<br>Ph : 080-23419212, 23419222<br>Mbl : 9448065247 |

**R.V.SREERAMA REDDY**
RETURNING OFFICER,
KARNATAKA STATE BAR COUNCIL, BANGALORE.

**P.D. 90**
**S.C. 50**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಒಇ 514 ಪಿಪಿಇ 2013, ಬೆಂಗಳೂರು, ದಿನಾಂಕ: 15ನೇ ಸೆಪ್ಟೆಂಬರ್, 2014..**

ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಒಇ 111 ಪಿಪಿಇ 2010, ದಿನಾಂಕ: 30–03–2013ರಲ್ಲಿನ ಪರಿಷ್ಕೃತ ಜ್ಯೇಷ್ಠತಾ ಪಟ್ಟಿಯಲ್ಲಿ ಈ ಕೆಳಕಂಡ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಕಾನೂನು ಅಧಿಕಾರಿ (ಕಿರಿಯ) ಇವರುಗಳಿಗೆ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಅವರ ಹೆಸರಿನ ಮುಂದೆ ಅಂಕಣ (4)ರಲ್ಲಿ ನಮೂದಿಸಿರುವ ದಿನಾಂಕವನ್ನು ಅರ್ಹತಾ ದಿನಾಂಕವಾಗಿ ನಿಗಧಿಪಡಿಸಿದ್ದು, ಅದರಂತೆ ಕರ್ನಾಟಕ ನಾಗರೀಕ ಸೇವಾ (ಪಿಪಿಪಿ) 1978ರ ಅಧಿನಿಯಮ 4(3) ರನ್ವಯ ಅಂಕಣ (4)ರಲ್ಲಿ ನಮೂದಿಸಿರುವ ದಿನಾಂಕವನ್ನು ಅರ್ಹತಾ ದಿನಾಂಕವನ್ನಾಗಿ (Deemed date of eligibility) ಪರಿಗಣಿಸಿ, ವೇತನಗಳನ್ನು ಕಾಲ್ಪನಿಕವಾಗಿ ನಿಗಧಿಪಡಿಸಿ ಆದೇಶಿಸಿದೆ.

| ಕ್ರ.ಸಂ | ಅಧಿಕಾರಿಯ ಹೆಸರು | ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಒಇ 111 ಪಿಪಿಇ 2010, ದಿನಾಂಕ: 30–03–2013ರಂದು ದಿನಾಂಕ: 01–01–2007ರಲ್ಲಿದ್ದಂತೆ ಹೊರಡಿಸಲಾದ ಸಹಾಯಕ ಸರ್ಕಾರಿ ಅಭಿಯೋಜಕರ ಪರಿಷ್ಕೃತ ಜ್ಯೇಷ್ಠತಾ ಪಟ್ಟಿ ಕ್ರಮಸಂಖ್ಯೆ | ದಿನಾಂಕ: 01–01–2007ರಲ್ಲಿದ್ದಂತೆ ಪರಿಷ್ಕೃತ ಜ್ಯೇಷ್ಠತಾನುಸಾರ ನೈಜವಾದ ಅರ್ಹತಾ ದಿನಾಂಕ |
|---|---|---|---|
| 1 | 2 | 3 | 4 |
| 1 | ಶ್ರೀ ಶರಣಗೌಡ ವಿ.ಪಾಟೀಲ್ | 130 | 17–01–2000 |
| 2 | ಶ್ರೀಮತಿ ಬಿ.ನಾಗಸುಂದ್ರಮ್ಮ | 133 | 17–01–2000 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೆಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

**P.R. 784**

## ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ:-

**ಆದೇಶ**

**ಸಂಖ್ಯೆ: ಸಿಬ್ಬಂದಿ.ಶಿಸ್ತು. ಟ್ರ್ಯಾಪ್.64/2009-10, ದಿನಾಂಕ:18.08.2014.**

**ವಿಷಯ:** ಶ್ರೀ ಮಡಿವಾಳಪ್ಪ ಹನುಮಂತಪ್ಪ ಲೋಕುರ, ಪ್ರಥಮ ದರ್ಜೆ ಭೂಮಾಪಕರು ನಗರಮಾಪನ ಯೋಜನಾಧಿಕಾರಿಗಳ ಕಚೇರಿ, ಹುಬ್ಬಳ್ಳಿ-ಧಾರವಾಡ ಇವರ ವಿರುದ್ಧ ಟ್ರ್ಯಾಪ್ ಪ್ರಕರಣದಲ್ಲಿ - ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:**
1. ಉಪ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್. ಐ.ಎನ್.ವಿ(ಜಿ). ಎಲ್.1/ ಸಿ.ಆರ್.1/2010/ಬಿಜಿಎಂ. ದಿನಾಂಕ:16-01-2010.
2. ಈ ಕಛೇರಿಯ ನಡವಳಿ ಸಮಸಂಖ್ಯೆ ದಿನಾಂಕ:18-2-2010.
3. ಈ ಕಛೇರಿಯ ನಡವಳಿ ಸಮಸಂಖ್ಯೆ ದಿನಾಂಕ:27-9-2010.
4. ಈ ಕಛೇರಿಯ ನಡವಳಿ ಸಮಸಂಖ್ಯೆ ದಿನಾಂಕ:5-1-2011.
5. ರಿಜಿಸ್ಟ್ರಾರ್ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಆದೇಶ ಸಂಖ್ಯೆ:ಲೋಕ್/ಐ.ಎನ್.ಕ್ಯೂ/14-ಎ/408/2011, ದಿನಾಂಕ:16-11-2011.
6. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್. ಐ.ಎನ್.ವಿ(ಜಿ).ಎಲ್-1/ಸಿಆರ್-1/2010,ಬಿಜಿಎಂ, ದಿನಾಂಕ: 16-5-2013.
7. ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ.9.ಸೇಇನಿ.95, ಬೆಂಗಳೂರು, ದಿನಾಂಕ:26-06-1996.

<u>ಪ್ರಸ್ತಾವನೆ:-</u>

ಶ್ರೀ ಮಡಿವಾಳಪ್ಪ ಹನುಮಂತಪ್ಪ ಲೋಕುರ, ಪ್ರಥಮ ದರ್ಜೆ ಭೂಮಾಪಕರು ಹಾಲಿ ನಗರಮಾಪನ, ಯೋಜನಾಧಿಕಾರಿಗಳ ಕಚೇರಿ, ಹುಬ್ಬಳ್ಳಿ-ಧಾರವಾಡ ಇವರು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ, ಬೆಳಗಾವಿ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಉಪ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ವರದಿ ದಿನಾಂಕ:16-01-2010 ರಲ್ಲಿ ಫಿರ್ಯಾದುದಾರರಾದ ಶ್ರೀ ಪ್ರಶಾಂತ್ ಆನಂದರಾವ್ ಗಾಯಕವಾಡ, ನಂ.11, 3ನೇ ಕ್ರಾಸ್, ನೆಹರುನಗರ, ಬೆಳಗಾವಿ ಇವರು ದಿನಾಂಕ:02-01-2010 ರಂದು ಬೆಳಗಾವಿ ಲೋಕಾಯುಕ್ತ ಪೊಲೀಸ್ ಠಾಣೆಗೆ ಹಾಜರಾಗಿ ಶ್ರೀ ಮಡಿವಾಳಪ್ಪ ಹನುಮಂತಪ್ಪ ಲೋಕುರ, ಪ್ರಥಮ ದರ್ಜೆ ಭೂಮಾಪಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ಕಚೇರಿ , ಬೆಳಗಾವಿ ಇವರ ವಿರುದ್ಧ ದೂರು ನೀಡಿ, ಫಿರ್ಯಾದುದಾರರ ದೊಡ್ಡಮ್ಮ ನವರ ಹೆಸರಿಗೆ ಸೇರಿದ ಬೆಳಗಾವಿ ನಗರದ ಆಸ್ತಿಯ ಸ.ನಂ.1355 ರ ಪೈಕಿ ನಂ.10825 ರ ಸ್ವತ್ತಿನಲ್ಲಿ ತಮ್ಮ ದೊಡ್ಡಮ್ಮ ನವರ ಹೆಸರನ್ನು ಕಡಿಮೆ ಮಾಡಿ ಫಿರ್ಯಾದುದಾರರ ಹೆಸರನ್ನು ಸೇರಿಸುವ ಸರ್ಕಾರಿ ಕೆಲಸವನ್ನು ಮಾಡಲು ರೂ.700/- ಗಳನ್ನು ಬೇಡಿಕೆ ಇಟ್ಟು ನಂತರ ರೂ.500/- ಗಳ ಅಕ್ರಮ ಸಂಭಾವನೆ ಕೇಳಿರುತ್ತಾರೆಂದು ತಿಳಿಸಿದ್ದ ಮೇರೆಗೆ ಬೆಳಗಾವಿ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ:1/2010ರ ಪ್ರಕಾರ ದಾಖಲಾಗಿದ್ದ ಮೇರೆಗೆ, ದಿನಾಂಕ:02-01-2010 ರಂದು ಬೀಸಿದ ಟ್ರ್ಯಾಪ್ ಬಲೆಯಲ್ಲಿ ಲಂಚದ ಹಣದ ಸಮೇತ ಸಿಕ್ಕಿಬಿದ್ದಿರುತ್ತಾರೆಂದು ತಿಳಿಸಿದ್ದ ಮೇರೆಗೆ ಈ ಕಛೇರಿಯ ನಡವಳಿ ದಿನಾಂಕ:18-02-2010 ರ ಆದೇಶದಲ್ಲಿ ಸದರಿ ಆರೋಪಿತ ನೌಕರರನ್ನು ಅಮಾನತ್ತಿನಲ್ಲಿಟ್ಟು ಅವರು ಹೊಂದಿರುವ ಹುದ್ದೆಯ ಮೇಲಿನ ಹಕ್ಕನ್ನು ತಹಶೀಲ್ದಾರ್, ಗದಗ ಕಛೇರಿಗೆ ವರ್ಗಾಯಿಸಲಾಗಿರುತ್ತದೆ. ನಂತರ ಈ ಕಛೇರಿಯ ನಡವಳಿ ದಿನಾಂಕ;27-09-2010 ರಲ್ಲಿ ಟ್ರ್ಯಾಪ್ ಪ್ರಕರಣದ ಇತ್ಯರ್ಥವನ್ನು ಕಾಯ್ದಿರಿಸಿ, ಅಮಾನತ್ತಿನಿಂದ ತೆರವುಗೊಳಿಸಿ, ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ಹುಬ್ಬಳ್ಳಿ-ಧಾರವಾಡ ಕಛೇರಿಗೆ ಪುನರ್ ನೇಮಕಗೊಳಿಸಿರುತ್ತದೆ ಹಾಗೂ ಈ ಕಛೇರಿಯ ನಡವಳಿ ದಿನಾಂಕ:05-01-2011 ರಲ್ಲಿ ಇವರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಮಂಜೂರಾತಿಯನ್ನು ನೀಡಿರುತ್ತದೆ.

ಇವರ ವಿರುದ್ಧದ ಟ್ರ್ಯಾಪ್ ಪ್ರಕರಣವು, ಬೆಳಗಾವಿ ಘನ ಪ್ರಧಾನ ಜಿಲ್ಲಾ ಸತ್ರ ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ:48/2011, ದಿನಾಂಕ:20-07-2012 ರಲ್ಲಿ ಶ್ರೀ ಮಡಿವಾಳಪ್ಪ ಹನುಮಂತಪ್ಪ ಲೋಕುರ, ಪ್ರಥಮ ದರ್ಜೆ ಭೂಮಾಪಕರು ಇವರ ವಿರುದ್ಧದ ಆರೋಪ ಸಾಬೀತಾದ ಹಿನ್ನೆಲೆಯಲ್ಲಿ ಕಲಂ 7 ಲಂಚ ನಿರೋಧ ಕಾಯಿದೆ 1988 ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ 1 ವರ್ಷ ಕಠಿಣ ಶಿಕ್ಷೆ ರೂ.5,000/- ದಂಡ, ದಂಡ ಪಾವತಿಸಲು ವಿಫಲರಾದರೆ 3 ತಿಂಗಳು ಸಾದಾ ಸಜೆ ಮತ್ತು ಕಲಂ 13(1)(ಡಿ) ಸಹವಾಚನ 13(2) ಲಂಚ ನಿರೋಧ ಕಾಯಿದೆ 1988 ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ 2 ವರ್ಷ ಕಠಿಣ ಶಿಕ್ಷೆ, ರೂ.5,000/- ದಂಡ, ದಂಡ ಪಾವತಿಸಲು ವಿಫಲರಾದರೆ 3 ತಿಂಗಳ ಸಾದಾ ಸಜೆಯನ್ನು ವಿಧಿಸಿರುತ್ತಾರೆ.

ಉಲ್ಲೇಖ(5) ರನ್ವಯ ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಆದೇಶ ದಿನಾಂಕ: 16-11-2011 ರಲ್ಲಿ ಸದರಿ ಆಪಾದಿತ ನೌಕರರ ವಿರುದ್ಧ ಟ್ರ್ಯಾಪ್ ಪ್ರಕರಣದ ಇಲಾಖಾ ವಿಚಾರಣೆಯನ್ನು ನಡೆಸಲು ಉಪ ರಿಜಿಸ್ಟ್ರಾರ್ ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರನ್ನು ನೇಮಕ ಮಾಡಿದ್ದು ಇವರಲ್ಲಿ ಇಲಾಖಾ ವಿಚಾರಣೆ ನಡೆಯುತ್ತಿರುತ್ತದೆ.

ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ.9.ಸೇಇನಿ.95, ಬೆಂಗಳೂರು, ದಿನಾಂಕ:26-06-1996 ರಲ್ಲಿ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 14(1) ರನುಸಾರವಾಗಿ ಸದರಿ ನಿಯಮಗಳ, ನಿಯಮ 11, 12 ಮತ್ತು 13 ರಲ್ಲಿ ಏನೇ ಹೇಳಲಾಗಿದ್ದರೂ ಕ್ರಿಮಿನಲ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಆರೋಪಕ್ಕಾಗಿ ದೋಷಸಿದ್ಧಿಯಾದ ಸರ್ಕಾರಿ ನೌಕರರನ್ನು ಪುನ: ಇಲಾಖಾ ವಿಚಾರಣೆಗೆ ಒಳಪಡಿಸದೆಯೇ ಸೇವೆಯಿಂದ ವಜಾ ಮಾಡುವ ಅಥವಾ ತೆಗೆದು ಹಾಕುವ ದಂಡನೆಯನ್ನು ವಿಧಿಸಬಹುದಾಗಿದೆ ಎಂದು, ಆಕಸ್ಮಾತ್ ಅಪೀಲಿನಲ್ಲಿ ಆಪಾದಿತ ನೌಕರರು ಖುಲಾಸೆಯಾದಲ್ಲಿ ಅವರನ್ನು ಮತ್ತೆ ಕೆಲಸಕ್ಕೆ ತೆಗೆದುಕೊಂಡು ವಜಾಗೊಳಿಸಿದ ಆದೇಶ ಆಗದೇ ಇದ್ದಲ್ಲಿ ಲಭ್ಯವಾಗಬಹುದಾದ ಎಲ್ಲಾ ಸೇವಾ ಭತ್ಯೆಗಳಿಗೆ ಅರ್ಹರಾಗಿರುತ್ತಾರೆಂದು ಸುತ್ತೋಲೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಸದರಿ ಆಪಾದಿತ ನೌಕರನ ಮೇಲೆ ಹೂಡಲಾದ ಕ್ರಿಮಿನಲ್ ಮೊಕದ್ದಮೆಯಲ್ಲಿ ಆರೋಪ ಸಾಬೀತಾಗಿ ಶಿಕ್ಷೆಯನ್ನು ವಿಧಿಸಿ ಆದೇಶವಾಗಿರುವ ಹಿನ್ನೆಲೆಯಲ್ಲಿ ಈ ನೌಕರರನ್ನು ಸರ್ಕಾರಿ ಸೇವೆಯಲ್ಲಿ ಮುಂದುವರೆಸಲು ನಿಯಮಗಳಲ್ಲಿ ಅವಕಾಶವಿಲ್ಲದ ಕಾರಣ, ಸದರಿಯವರನ್ನು ಪುನ: ಇಲಾಖಾ ವಿಚಾರಣೆಗೆ ಒಳಪಡಿಸದೆಯೇ ಸೇವೆಯಿಂದ ವಜಾ ಮಾಡುವ ಬಗ್ಗೆ ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಿತ್ವಿಕ್ ಪಾಂಡೆ, ಭಾ.ಆ.ಸೇ., ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಮಾನ್ಯ ಬೆಳಗಾವಿ ಪ್ರಧಾನ ಜಿಲ್ಲಾ ಸತ್ರ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಆರೋಪಿತರ ವಿರುದ್ಧ ಆರೋಪವು ಸಾಬೀತಾಗಿದ್ದು ದೋಷಸಿದ್ಧಿಯಾಗಿರುವುದರಿಂದ, ಕರ್ನಾಟಕ ಸರ್ಕಾರಿ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮಗಳ ನಿಯಮ 9(3) ರಲ್ಲಿ ಓದಿಕೊಂಡ ನಿಯಮ 8(viii) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಡಿವಾಳಪ್ಪ ಹನುಮಂತಪ್ಪ ಲೋಕುರ, ಪ್ರಥಮ ದರ್ಜೆ ಭೂಮಾಪಕರು, ನಗರಮಾಪನ ಯೋಜನಾಧಿಕಾರಿಗಳ ಕಚೇರಿ, ಹುಬ್ಬಳ್ಳಿ-ಧಾರವಾಡ ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣವೇ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿಸಿದ್ದೇನೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

**P.R. 785**

## DEPARTMENT OF COMMERCIAL TAXES

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

| | |
|---|---|
| **Sub:** | KVAT Act, 2003 – Clarification under Section 59(4) regarding the rate of tax applicable on 'Thermocol' or 'Polystyrene Expanded'-reg |
| **Ref:** | Application dated: 11-07-2014 of M/s. Quality Thermopack and Solutions Industries, Bangalore. (Tin. 29740307289) |

In the application cited above of M/s. Quality Thermopack and Solutions Industries, N.B-29 & B-30, KSSIDC Industrial Estate, Kumbalgodu, Mysore Road, Bangalore-560074 has sought clarification regarding the rate of tax applicable on 'Thermocol' or 'Polystyrene Expanded'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.63/2014-15, DATED: 21-10-2014**

It is clarified that on 'Thermocol' or 'Polystyrene Expanded' is liable to tax at 14.5% from 01-08-2012 as unscheduled goods under Section 4(1)(b)(iii) of the Karnataka Value Added Tax Act, 2003.

**AJAY SETH ,**
Commissioner of Commercial Taxes
(Karnataka), Bangalore.

**P.R. 786**
**S.C. 25**

## DEPARTMENT OF COMMERCIAL TAXES

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

| | |
|---|---|
| **Sub:** | KVAT Act, 2003 – Clarification under Section 59(4) regarding the rate of tax applicable on 'Wooden Pallet'-reg |
| **Ref:** | Application dated: 24-07-2014 of M/s. ECO Solutions, Bangalore. (Tin. 29750839377) |

In the application cited above of M/s. ECO Solutions, No.392, 6th Block, 18th Main, 6th Cross, Koramangala, Bangalore-560095 has sought clarification regarding the rate of tax applicable on 'Wooden Pallet'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.68/2014-15, DATED: 21-10-2014**

It is clarified that on 'Wooden Pallet' is liable to tax at 14.5% from 01-08-2012 as unscheduled goods under Section 4(1)(b)(iii) of the Karnataka Value Added Tax Act, 2003.

**AJAY SETH ,**
Commissioner of Commercial Taxes
(Karnataka), Bangalore.

**P.R. 787**
**S.C. 25**

## DEPARTMENT OF REGISTRATION AND STAMPS

**NOTIFICATION**

**No.DRO/TMK/45B/CVC MARKET VALUE/45B/2012-13, Tumkur, Dated 22nd July 2013**

**Sub**: Revision of Market Value Guidelines of immovable properties in the Jurisdiction of Tumkur Taluk in Tumkur District.

**Ref:** No.CVC(24)/Tumkur/2013-14, Bangalore, dated 03-07-2013.

Where as the draft of estimated Market value guideline rates of the immovable properties in the jurisdiction of the Sub-Registry Office Tumkur Taluk in Tumkur District were published for the information of the public vide No.ಮಾ.ಮೌ.ಮಾ.ಊ.ಸ/1/12-13 dated: 19-05-2012 and also in all the public offices notice board, dated : 19-05-2012 inviting objections and suggestions from all persons likely to be affected thereby within 15 days from the date of the publication and finally this estimated market value guideline rates with some changes were approved by the Central Valuation Committee meeting held on 03-07-2013.

**Senior Sub-Registrar Office,** Tumkur **Taluk,** Tumkur **District.**

and, whereas objections and suggestions received have been considered by the Central Valuation Committee constituted for the purpose.

Now, therefore, in exercise of the powers conferred under section 45(B) of Karnataka Stamp Act, 1957, read with Rule 7(3) of Karnataka Stamp (Constitution of Central Valuation Committee for Estimation publication and Revision of Market Value Guidelines of Properties) Rules, 2003 the Central Valuation Sub Committee hereby publish the market value guideline rates of the immovable properties in the jurisdiction of the above Sub-Registry Office in Tumkur Taluk in Tumkur District as noted in the Annexure along with related policy to be adopted.

**This shall come into effect from 15th July 2013**

By Order and in the name of Central Valuation Committee, Bangalore.

**Thimmareddy,**
Secretary
Central Valuation Sub Committee,
Tumkur Taluk in Tumkur District

**ತುಮಕೂರು ತಾಲ್ಲೂಕು ಉಪನೋಂದಣಿ ಕಛೇರಿಯ ವ್ಯಾಪ್ತಿಗೆ ಒಳಪಡುವ ಸ್ಥಿರಾಸ್ತಿಗಳ ಪರಿಷ್ಕೃತ ಬೆಲೆಪಟ್ಟಿ**

| ಕ್ರಮ ಸಂಖ್ಯೆ | ಗ್ರಾಮಗಳ ಹೆಸರು | ಕೃಷಿ ಜಮೀನಿನ ಪರಿಷ್ಕೃತ ಬೆಲೆ (ಪ್ರತಿ ಎಕರೆಗೆ) | | | ನಿವೇಶನಗಳ ಪರಿಷ್ಕೃತ ಬೆಲೆ (ಪ್ರತಿ ಚ.ಅಡಿಗೆ) | |
|---|---|---|---|---|---|---|
| | | ಖುಷ್ಕಿ | ತರಿ | ಭಾಗಾಯ್ತು | ವಾಸೋಪಯೋಗಿ | ವಾಣಿಜ್ಯೋಪಯೋಗಿ |
| **1** | **2** | **3** | **4** | **5** | **8** | **9** |
| | **ಬೆಳ್ಳಾವಿ ಹೋಬಳಿ** | | | | | |
| 1 | ಅಗಳಗುಂಟೆ | 175000 | 200000 | 300000 | 35 | 40 |
| 2 | ಅಜ್ಜಗೋನಹಳ್ಳಿ | | | | | |
| 2(1) | ರಾಷ್ಟ್ರೀಯ ಹೆದ್ದಾರಿ (4) ಹೊಂದಿಕೊಂಡಿರುವ ಜಮೀನುಗಳು – ಸರ್ವೆ ನಂ. 1,2,3,4,5,6 | 1750000 | 1750000 | 1750000 | 90 | 100 |

| 1 | 2 | 3 | 4 | 5 | 8 | 9 |
|---|---|---|---|---|---|---|
| 2(2) | ಊರಿನ ಕೂಡು ರಸ್ತೆಗಳಿಗೆ ಹೊಂದಿಕೊಂಡಿರುವ ಜಮೀನು – ಸರ್ವೆ ನಂ. –7,8,9,13,15,20,21,22,23,24, 25,26,30,31,32,33,34,35,45,75 | 400000 | 450000 | 500000 | 60 | 65 |
| 2(3) | ಇತರೆ ಸರ್ವೆ ನಂ. | 200000 | 250000 | 350000 | 45 | 50 |
| 3 | ಅಪ್ಪಿನಾಯ್ಕನ ಹಳ್ಳಿ | 150000 | 200000 | 350000 | 25 | 30 |
| 4 | ಅಸಲೀಪುರ | 150000 | 200000 | 350000 | 25 | 30 |
| 5 | ಬಳ್ಳಾಪುರ | 300000 | 300000 | 500000 | 50 | 60 |
| 6 | ಬಾಣಾವರ | 200000 | 200000 | 350000 | 25 | 30 |
| 7 | ಬೆಳ್ಳಾವಿ | | | | | |
| 7(1) | ತುಮಕೂರಿನಿಂದ ಬೆಳ್ಳಾವಿ ರಸ್ತೆಗೆ ಹೊಂದಿಕೊಂಡಿರುವ ಸರ್ವೆ ನಂ.ಗಳ ಜಮೀನು : 1 ರಿಂದ 4,15,16,18, 19,20,21,23,33 ರಿಂದ 38,40,41,66,78 ರಿಂದ 88,114,115,116, | 500000 | 525000 | 675000 | 120 | 130 |
| 7(2) | 89,91,94,95,96,98,120,121,124,125,136,137 | 350000 | 400000 | 500000 | 55 | 60 |
| 7(3) | ಇತರೆ ಸರ್ವೆ ನಂಬರುಗಳು | 250000 | 250000 | 400000 | 35 | 40 |
| 8 | ಬೆಳ್ಳಾವಿ ಅಮಾನಿಕೆರೆ | 250000 | 250000 | 400000 | 25 | 30 |
| 9 | ಬೊಮ್ಮನಹಳ್ಳಿ | | | | | |
| 9(1) | ರಾಷ್ಟ್ರೀಯ ಹೆದ್ದಾರಿಗೆ (4) ಹೊಂದಿಕೊಂಡಿರುವ ಜಮೀನುಗಳು – ಸರ್ವೆ ನಂ. 10,11,12,13,14,16,17,18,22, 23,30,31,32,33, 34,37,38,49 | 1750000 | 1750000 | 1750000 | 55 | 60 |
| 9(2) | ಇತರೆ ಸರ್ವೆ ನಂ. | 350000 | 400000 | 500000 | 30 | 40 |
| 10 | ಬುಗುಡನಹಳ್ಳಿ | 250000 | 325000 | 500000 | 45 | 50 |
| 11 | ಬುಗುಡನಹಳ್ಳಿ ಅಮಾನಿಕೆರೆ | 250000 | 325000 | 500000 | 25 | 30 |
| 12 | ಚನ್ನೇನಹಳ್ಳಿ | 150000 | 200000 | 400000 | 25 | 30 |
| 13 | ಚಿಕ್ಕನಾರವಂಗಲ | 200000 | 250000 | 400000 | 25 | 30 |
| 14 | ಚಿಕ್ಕಸೀಬಿ | | | | | |
| 14(1) | ರಾಷ್ಟ್ರೀಯ ಹೆದ್ದಾರಿ (4) ಕ್ಕೆ ಹೊಂದಿಕೊಂಡಿರುವ ಜಮೀನುಗಳು – ಸರ್ವೆ ನಂ.4,7,8,9,10,11,19,24,25,26,27,29,30,32, 34,35,36,37,38,46,47,49 | 1450000 | 1450000 | 1450000 | 90 | 100 |

